ಗ್ರಾಮೀಣ ಮಕ್ಕಳ ಅನುಕೂಲಕ್ಕಾಗಿ ಸರ್ಕಾರ ಆರಂಭಿಸಿದ ವಸತಿ ಶಾಲೆಗಳ ಸಮೂಹ ಕಡೆಗಣನೆಗೆ ಒಳಗಾಗಿರುವ ಬಗ್ಗೆ

ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ(ಸ್ಥಳೀಯಸಂಸ್ಥೆಗಳಕ್ಷೇತ್ರ):-

22 (110) ಮಾನ್ಯ ಸಮಾಜ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಅಧೀನದಲ್ಲಿ ಎಷ್ಟು ವಸತಿ ಶಾಲೆಗಳನ್ನು ನಡೆಸಲಾಗುತ್ತಿದೆ ; (ಜಿಲ್ಲಾವಾರು ವಿವರ ನೀಡುವುದು)

ಆ) ಈ ಹಿಂದೆ ಸಂಘದ ಅಧೀನದಲ್ಲಿರುವ ಅಲ್ಪಸಂಖ್ಯಾತ ವಸತಿ ಶಾಲೆಗಳನ್ನು ಪ್ರತ್ಯೇಕಿಸಿ ಇಲಾಖೆಯೊಂದಿಗೆ ವಿಲೀನಗೊಳಿಸಿದ್ದು

ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಹಾಗೂ ಇತರೆ ಹಿಂದುಳಿದ ವರ್ಗಗಳ ಮಕ್ಕಳನ್ನು ಮಾತ್ರ ಇದೇ ಸಂಸ್ಥೆಯೊಂದಿಗೆ ಸೇರಿಸಿರುವುದರಿಂದ ಇದನ್ನು ಒಂದು ನಿಗಮ/ಮಂಡಳಿಯಂತೆ ಪರಿಗಣಿಸುತ್ತಿರುವುದರಿಂದ ಅಲ್ಲಿನ ಸಿಬ್ಬಂದಿಯವರು ಅಸಮಾಧಾನ ವ್ಯಕ್ತಪಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಇ) ಮಾಹಿತಿಯ ಪ್ರಕಾರ 145 ಶಾಲೆಗಳಿಗೆ ಮೂಲಭೂತ ಸೌಲಭ್ಯಗಳಿಲ್ಲದಿರುವುದು ಹಾಗೂ ಮಕ್ಕಳಿಗೆ ಕೊಡಲು ಸರ್ಕಾರ ಡೆಸ್ಕ್-ಬೆಂಚ್ ನೀಡಿಲ್ಲವೆಂದು ವರದಿಯಾಗಿರುವುದು ನಿಜವೇ ;

(ಈ) ಬಡ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಹಾಗೂ ಇತರೆ ಹಿಂದುಳಿದ ವರ್ಗಗಳ ಪ್ರತಿಭಾವಂತ ಮಕ್ಕಳಿಗೆ ಪ್ರವೇಶಾತಿಯನ್ನು ಒದಗಿಸಿ ಅವರಿಗೆ ಸೌಲಭ್ಯ ಕೊಡದಿದ್ದಲ್ಲಿ ಇದು ಸಾಮಾಜಿಕ ಅನ್ಯಾಯವಾಗುವುದಿಲ್ಲವೇ ;

(ಉ) ಈ ಸಮಸ್ಯೆಗಳ ಸುಧಾರಣೆಗೆ ಸರ್ಕಾರ ಕೈಗೊಂಡ ಕ್ರಮವೇನು?